# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1230 (1442) |
| ಉತ್ತರಿಸುವ ದಿನಾಂಕ | 17-03-2021 |
| ಮಾನ್ಯ ಸದಸ್ಯರ ಹೆಸರು | ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಆಸ್ತಿ ನೋಂದಣಿ ವೇಳೆ ಅಕ್ರಮಗಳನ್ನು ತಡೆಗಟ್ಟುವ ಸಲುವಾಗಿ ಉಪನೋಂದಣಿ ಕಛೇರಿಗಳಲ್ಲಿ ಸರ್ಕಾರ ಜಾರಿಗೆ ತಂದಿರುವ ಓಟಿಪಿ ವ್ಯವಸ್ಥೆ ಗಮನಾರ್ಹವಾದದ್ದು; ಆದರೆ ಇಂತಹ ವ್ಯವಸ್ಥೆಯಿಂದ ಜನರು ಒಂದು ನೋಂದಣಿಗೆ ಎರಡು ತಾಸಿಗೂ ಅಧಿಕ ಸಮಯ ಕಾಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ತಿಳಿಸುವುದು; | ರಾಜ್ಯದಲ್ಲಿ ವ್ಯವಹಾರ ಸರಳೀಕರಣಗೊಳಿಸುವ (EODB) ನಿಟ್ಟಿನಲ್ಲಿ ದಸ್ತಾವೇಜು ನೋಂದಾಯಿಸುವಾಗ ಸರಿಯಾದ ಪಕ್ಷಕಾರರನ್ನು ಗುರುತಿಸಲು ಹಾಗೂ ಮೋಸದ ನೋಂದಣಿ ಮತ್ತು impersonation ಆಗುವುದನ್ನು ತಡೆಯಲು ಮೊಬೈಲ್ ನಂಬರ್ ಮೂಲಕ ಓ.ಟಿ.ಪಿ (One Time Password) ಪಡೆದು ಅದನ್ನು ಪ್ರಮಾಣೀಕರಿಸುವ ಉದ್ದೇಶಕ್ಕಾಗಿ ದಿನಾಂಕ: 11-09-2019 ರಿಂದ ಓ.ಟಿ.ಪಿ ವ್ಯವಸ್ಥೆ ಜಾರಿಗೊಳಿಸಲಾಗಿರುತ್ತದೆ. ಈ ರೀತಿಯಾಗಿ ಜಾರಿಗೆ ತಂದಿರುವ ಓ.ಟಿ.ಪಿ ವ್ಯವಸ್ಥೆಯಿಂದ ಕೆಲವೊಮ್ಮೆ ಸಮಸ್ಯೆ ಉಂಟಾಗಿ ಜನರು ನೋಂದಣಿಗಾಗಿ ಕಾಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>ಉದಾಹರಣೆಗೆ ದಿನಾಂಕ: 08-03-2021ರಂದು ಹಾಗೂ ದಿನಾಂಕ:09-03-2021ರಂದು ಓ.ಟಿ.ಪಿ ಸಮಸ್ಯೆ ಉಂಟಾಗಿದ್ದು, ಇದು ಕಾವೇರಿ ತಂತ್ರಾಂಶದ ಸಮಸ್ಯೆ ಆಗಿರುವುದಿಲ್ಲ. ಇದು e-Governance ಇಲಾಖೆಯ ಅಡಿ ಬರುವ Directorate of Electronic Delivery of Citizen Services (EDCS) ರವರ SMS ಸೇವೆಯಲ್ಲಿನ ಸಮಸ್ಯೆಯಾಗಿರುತ್ತದೆ. |
| ಆ) | ಈ ಪ್ರಕ್ರಿಯೆ ಬಂದ ನಂತರ ನೋಂದಣಿಗಳು ಜಾಸ್ತಿಯಾಗಿವೆಯೇ ಅಥವಾ ಕಡಿಮೆಯಾಗಿದೆಯೇ; ತಿಳಿಸುವುದು. | ಕೆಲವು ತಿಂಗಳುಗಳಲ್ಲಿ ಕೋವಿಡ್ ಹಾಗೂ ಲಾಕ್‌ಡೌನ್‌ನಿಂದಾಗಿ ದಸ್ತಾವೇಜು ನೋಂದಣಿ ಕಡಿಮೆಯಾಗಿರುತ್ತದೆ ಪ್ರಸ್ತುತ ರಾಜ್ಯದ ಉಪನೋಂದಣಿ ಕಛೇರಿಗಳಲ್ಲಿ ನೋಂದಣಿ ಕಾರ್ಯವು ಸರಾಗವಾಗಿ ನಡೆಯುತ್ತಿದೆ. ದಿನ ನಿತ್ಯ ನೋಂದಣಿಗಳು ಜಾಸ್ತಿಯಾಗಿರುತ್ತವೆ. |
| ಇ) | ಈ ಪ್ರಕ್ರಿಯೆ ಜಾರಿಗೆ ಬಂದ ನಂತರ ಒಂದು ನೋಂದಣಿ ಮಾಡಿಸಲು ಕಛೇರಿಗೆ ನೀಡಿದರೆ 15 ದಿನಗಳ ನಂತರ ನೋಂದಣಿ ಮಾಡುವುದಾಗಿ ಮುಂದಿನ ದಿನಾಂಕಗಳನ್ನು ನೀಡಿ ವಾಪಸ್ ಕಳುಹಿಸಲಾಗುತ್ತಿದೆ. ಇದಕ್ಕೆ ಕಾರಣಗಳೇನು; | ನೋಂದಣಿ ಮಾಡಿಸಲು ಕಛೇರಿಗೆ ಭೇಟಿ ನೀಡಿದವರಿಗೆ ಬಹುತೇಕ ಕಛೇರಿಗಳಲ್ಲಿ ನೋಂದಣಿಗೆ ಅಂದೇ ಅವಕಾಶ ಕಲ್ಪಿಸಲಾಗುತ್ತಿದೆ. ಹಾಗೂ ಕೆಲವೊಂದು ಅನಿವಾರ್ಯ ಸಂದರ್ಭದಲ್ಲಿ ಮಾತ್ರ 02 ಅಥವಾ 03 ದಿನದಲ್ಲಿ ನೋಂದಣಿಗೆ ಅವಕಾಶ ಕಲ್ಪಿಸಲಾಗುತ್ತಿದೆ. ಹಾಗೂ ಸಾರ್ವಜನಿಕರ ಅನುಕೂಲಕ್ಕಾಗಿ ಮತ್ತು ವರ್ಷಾಂತ್ಯದ ನೋಂದಣಿ ಒತ್ತಡ ಕಡಿಮೆ ಮಾಡಲು ದಸ್ತಾವೇಜುಗಳ ನೋಂದಣಿಗೆ ಬೆಳಿಗ್ಗೆ 10.00 ರಿಂದ ಸಂಜೆ 05.30 ರವರೆಗೆ ನಿಗದಿಪಡಿಸಿರುವ ಅವಧಿಯನ್ನು ಬೆಳಿಗ್ಗೆ 09.00 ರಿಂದ ಸಂಜೆ 06.30 ರವರೆಗೆ ವಿಸ್ತರಿಸಲಾಗಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಈ) | ಹೊಸ ತಂತ್ರಾಂಶ ಅಳವಡಿಕೆಯಿಂದ ಸರಾಸರಿ 50% ನೋಂದಣಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಕೈಗೊಂಡಿರುವ ಕ್ರಮಗಳೇನು; | ಈ ಹೊಸ ತಂತ್ರಾಂಶದ ಅಳವಡಿಕೆಯ ನಂತರ ರಾಜ್ಯದ ಉಪನೋಂದಣಿ ಕಛೇರಿಗಳಲ್ಲಿ ನೋಂದಣಿ ಕಾರ್ಯವು ಸರಾಗವಾಗಿ ನಡೆಯುತ್ತಿದೆ. 2018-19ನೇ ಸಾಲಿನಲ್ಲಿ 19,99,298 ದಸ್ತಾವೇಜುಗಳು, 2019-20ನೇ ಸಾಲಿನಲ್ಲಿ 19,57,833 ದಸ್ತಾವೇಜುಗಳು, ಹಾಗೂ 2020-21ನೇ ಸಾಲಿನಲ್ಲಿ ಕೋವಿಡ್ ಲಾಕ್-ಡೌನ್ ನಡುವೆಯು 16,73,372 ದಸ್ತಾವೇಜುಗಳು ನೋಂದಣಿಯಾಗಿರುತ್ತವೆ. ಹಾಗೂ ದಿನ ನಿತ್ಯ 8280ಕ್ಕೂ ಹೆಚ್ಚು ದಸ್ತಾವೇಜುಗಳು ನೋಂದಣಿಯಾಗುತ್ತಿರುತ್ತದೆ. |
| ಉ) | ಈ ತಂತ್ರಾಂಶ ಅಳವಡಿಕೆಯಿಂದ ದಿನೇ ದಿನೇ ಸರ್ವರ್ ಸಮಸ್ಯೆಗಳಿಂದ ನೋಂದಣಿಗಳಾಗದೆ ಸಾರ್ವಜನಿಕರು ಪರದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ದಸ್ತಾವೇಜುಗಳ ನೋಂದಣಿಯನ್ನು ಕಾವೇರಿ ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ. ದಸ್ತಾವೇಜುಗಳ ನೋಂದಣಿ ಸಮಯದಲ್ಲಿ ಸ್ಥಿರಾಸ್ತಿ ಮತ್ತು ಮಾರಾಟಗಾರರ ವಿವರಗಳನ್ನು ಕೆಳಕಂಡಂತೆ ಸಂಬಂಧಪಟ್ಟ ಆಸ್ತಿಯ ತಂತ್ರಾಂಶದಿಂದ ಆನ್‌ಲೈನ್ ಮೂಲಕ ಪಡೆದು, ಪ್ರಮಾಣೀಕರಿಸಿಕೊಂಡು ದಸ್ತಾವೇಜುಗಳನ್ನು ನೋಂದಾಯಿಸಲಾಗುತ್ತದೆ.<br>• ಗ್ರಾಮ ಪಂಚಾಯತ್ ವ್ಯಾಪ್ತಿಯ ಸ್ಥಿರಾಸ್ತಿಗಳಿಗೆ ಸಂಬಂಧಿಸಿದ ವಿವರಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ನಿರ್ವಹಿಸುತ್ತಿರುವ "ಇ-ಸ್ವತ್ತು" ತಂತ್ರಾಂಶದಿಂದ ಪಡೆಯಲಾಗುತ್ತದೆ.<br>• ಕೃಷಿ ಜಮೀನುಗಳಿಗೆ ಸಂಬಂಧಿಸಿದ ವಿವರಗಳನ್ನು ಭೂಮಿ ಮಾನಿಟರಿಂಗ್ ಸೆಲ್ ನಿರ್ವಹಿಸುತ್ತಿರುವ "ಭೂಮಿ" ತಂತ್ರಾಂಶದಿಂದ ಪಡೆಯಲಾಗುತ್ತದೆ.<br>• ನಗರ ಪ್ರದೇಶಗಳ ಸ್ಥಿರಾಸ್ತಿಗಳಿಗೆ ಸಂಬಂಧಿಸಿದ ವಿವರಗಳನ್ನು ನಗರಾಭಿವೃದ್ಧಿ ಇಲಾಖೆ ನಿರ್ವಹಿಸುತ್ತಿರುವ "ಇ-ಆಸ್ತಿ" ತಂತ್ರಾಂಶದಿಂದ ಪಡೆಯಲಾಗುತ್ತದೆ.<br>ದಸ್ತಾವೇಜುಗಳ ನೋಂದಣಿ ಸಮಯದಲ್ಲಿ ಮೇಲ್ಕಂಡ ತಂತ್ರಾಂಶಗಳಿಂದ ಸ್ಥಿರಾಸ್ತಿಗಳ ವಿವರಗಳನ್ನು ಆನ್‌ಲೈನ್ ಮೂಲಕ ಪಡೆಯಲು ಸಾಧ್ಯವಾಗದೇ ಇರುವ ಸಂದರ್ಭಗಳಲ್ಲಿ, ಇಂತಹ ದಸ್ತಾವೇಜುಗಳ ನೋಂದಣಿಯಲ್ಲಿ ಅಡಚಣೆ ಉಂಟಾಗುತ್ತದೆ. ಈ ರೀತಿ ಉಂಟಾದ ಅಡಚಣೆಗಳನ್ನು ಸಂಬಂಧಿಸಿದ ತಂತ್ರಾಂಶ ನಿರ್ವಹಿಸುತ್ತಿರುವ ತಾಂತ್ರಿಕ ಸದಸ್ಯರ ಗಮನಕ್ಕೆ ತರಲಾಗುತ್ತದೆ. ಅವರಿಂದ ತಾಂತ್ರಿಕ ಸಮಸ್ಯೆಗಳನ್ನು ಪರಿಹರಿಸಿಕೊಂಡ ನಂತರ ಆನ್‌ಲೈನ್ ಮೂಲಕ ಸಂಬಂಧಿಸಿದ ತಂತ್ರಾಂಶದಿಂದ ಸ್ಥಿರಾಸ್ತಿಗಳ ವಿವರಗಳನ್ನು ಪಡೆದುಕೊಂಡು ದಸ್ತಾವೇಜುಗಳ ನೋಂದಣಿಯನ್ನು ಪೂರ್ಣಗೊಳಿಸಲಾಗುತ್ತಿದೆ. |

. . . 3

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಊ) | ಸದರಿ ನೋಂದಣಿಗೆ ಆಪರೇಟರ್‌ಗಳ ಕೊರತೆಯಿದ್ದು, ಇದಕ್ಕೆ ಸರ್ಕಾರ ಕೈಗೊಂಡ ಕ್ರಮವೇನು ಮತ್ತು ಹಳೆಯ ಕಂಪ್ಯೂಟರ್‌ಗಳಿಗೆ ಹೊಸ ತಂತ್ರಾಂಶ ಅಳವಡಿಸಲು ಸಾಧ್ಯವಾಗದೆ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಅಥವಾ ಎಲ್ಲಾ ಉಪನೋಂದಣಾಧಿಕಾರಿ ಕಛೇರಿಗಳಲ್ಲಿ ಹೊಸ ಕಂಪ್ಯೂಟರ್‌ಗಳನ್ನು ನೀಡಿ ಹೊಸ ತಂತ್ರಾಂಶವನ್ನು ಅಳವಡಿಸಲಾಗಿದೆಯೆ? | ಉಪನೋಂದಣಿ ಕಛೇರಿಗಳಲ್ಲಿ ದಸ್ತಾವೇಜುಗಳು ನೋಂದಣಿಯಾಗುವ ಪ್ರಮಾಣದನುಸಾರ ನೋಂದಣಿ ಆಪರೇಟರ್‌ಗಳನ್ನು ನಿಯೋಜಿಸಲಾಗಿದೆ. ಪ್ರಸ್ತುತ ಕಾವೇರಿ ತಂತ್ರಾಂಶದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ನೋಂದಣಿ ಕಾರ್ಯವು ಸರಾಗವಾಗಿ ನಡೆಯುತ್ತಿರುತ್ತದೆ. ಆದಾಗಿಯೂ ಹೆಚ್ಚುವರಿ ಡಿಇಓಗಳ ಅವಶ್ಯಕತೆ ಇರುವ ಕಡೆ ಹೊಸದಾಗಿ ಡಿಇಓಗಳನ್ನು ನಿಯೋಜಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಎಲ್ಲಾ ಉಪನೋಂದಣಾಧಿಕಾರಿ ಕಛೇರಿಗಳಿಗೆ ಹೊಸ ಕಂಪ್ಯೂಟರ್ ನೀಡುವ ಸಂಬಂಧ ಪ್ರಕ್ರಿಯೆಯು ಪರಿಶೀಲನೆಯಲ್ಲಿರುತ್ತದೆ. |

ಸಂಖ್ಯೆ: ಕಂಇ/132/ಎಂಎನ್‌ಎಸ್‌ಎ/2021

(ಆರ್.ಅಶೋಕ)
ಕಂದಾಯ ಸಚಿವರು